

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ | : | 1349 |
| ಸದಸ್ಯರ ಹೆಸರು | : | ಶ್ರೀ ಐವನ್ ಡಿ'ಸೋಜಾ |
| ಉತ್ತರಿಸುವ ದಿನಾಂಕ | : | 18-03-2020 |
| ಉತ್ತರಿಸುವವರು | : | ಉಪಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನಲ್ಲಿ ಅಂಬೇಡ್ಕರ್ ಭವನ ನಿರ್ಮಾಣಗೊಂಡಿದ್ದರೂ ಅದನ್ನು ಸಾರ್ವಜನಿಕರ ಉಪಯೋಗಕ್ಕೆ ನೀಡದಿರಲು ಕಾರಣಗಳೇನು; (ವಿವರ ನೀಡುವುದು) ಇದನ್ನು ಸಾರ್ವಜನಿಕರಿಗೆ ಯಾವಾಗ ಅರ್ಪಿಸಲಾಗುವುದು; | ಸರ್ಕಾರದ ಆದೇಶ ಸಂಖ್ಯೆ: ಸಕಇ 419 ಪಕವಿ 2017 ದಿನಾಂಕ: 28-05-2016 ಮತ್ತು 24-03-2018ರಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ದೇರೆಬೈಲು ಗ್ರಾಮದ ಸರ್ವೇ ನಂ-178/1ಪಿ2 ಮತ್ತು 178/1ಪಿ4 ರಲ್ಲಿ ಒಟ್ಟಾರೆ 1.61 ಎಕರೆ ಜಾಗದಲ್ಲಿ ಒಟ್ಟಾರೆ ರೂ.1782.50 ಲಕ್ಷಗಳ ಅಂದಾಜು ವೆಚ್ಚದಲ್ಲಿ ಜಿಲ್ಲಾ ಮಟ್ಟದ ಡಾ ಬಿ.ಆರ್ ಅಂಬೇಡ್ಕರ್ ಭವನ ನಿರ್ಮಾಣ ಮಾಡಲು ಮಂಜೂರಾತಿ ನೀಡಿ, ಈ ಕೆಳಕಂಡ ಮೂಲಗಳಿಂದ ಅನುದಾನ ಭರಿಸಲು ಆದೇಶಿಸಲಾಗಿರುತ್ತದೆ. |

(ರೂ ಲಕ್ಷಗಳಲ್ಲಿ)

| ಕ್ರ ಸಂ | ಇಲಾಖೆ | ನಿಗಧಿಪಡಿಸದ ಮೊತ್ತ |
|---|---|---|
| 1 | ಸಮಾಜ ಕಲ್ಯಾಣ ಇಲಾಖೆ | 1117.50 |
| 2 | ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು | 200.00 |
| 3 | ಮಂಗಳೂರು ಮಹಾನಗರ ಪಾಲಿಕೆ | 250.00 |
| 4 | ಜಿಲ್ಲಾ ಪಂಚಾಯ್ತಿ, ಮಂಗಳೂರು | 115.00 |
| 5 | ಯೋಜನಾ ನಿರ್ದೇಶಕರು, ನಗರಾಭಿವೃದ್ಧಿ ಕೋಶ | 100.00 |
| | ಒಟ್ಟು | 1782.50 |

ಸಮಾಜ ಕಲ್ಯಾಣ ಇಲಾಖೆಗೆ ನಿಗಧಿಪಡಿಸಿದ್ದ ಅನುದಾನ ರೂ.1117.50 ಲಕ್ಷಗಳನ್ನು ಪೂರ್ಣವಾಗಿ ಬಿಡುಗಡೆ ಮಾಡಲಾಗಿರುತ್ತದೆ.

ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ ಇವರಿಂದ ಸ್ವೀಕೃತಿಯಾದ ಪ್ರಸ್ತಾವನೆ ಮೇರೆಗೆ ಸದರಿ ಭವನ ನಿರ್ಮಾಣ ಸ್ಥಳೀಯ ಮೂಲಗಳಿಂದ ಕ್ರೂಢೀಕರಣವಾಗದ

| | | |
|---|---|---|
| | | ಅನುದಾನ ರೂ. 395.70 ಲಕ್ಷಗಳನ್ನು ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಭರಿಸುವ ಬಗ್ಗೆ ಹಾಗೂ ಭವನ ನಿರ್ಮಾಣಕ್ಕೆ ಅಗ್ನಿಶಾಮಕ ನಿಯಮದಂತೆ ಹೆಚ್ಚುವರಿಯಾಗಿ ವೆಟ್‌ರೈಸರ್ ಹಾಗೂ ಎಕ್ಸಿಟಿಂಗ್‌ವಿಷರ್ ಹಾಗೂ ಪಂಪ್ ಹೌಸ್‌ನ್ನು ನಿರ್ಮಾಣ ಮಾಡಲು ಕರ್ನಾಟಕ ಗೃಹ ಮಂಡಳಿ ವತಿಯಿಂದ ಪಡೆದು ಸಲ್ಲಿಸಲಾದ ರೂ.75.00 ಲಕ್ಷಗಳ ಅಂದಾಜು ಪಟ್ಟಿಗೆ ಮಂಜೂರಾತಿ ನೀಡಿ, ಅನುದಾನ ಬಿಡುಗಡೆ ಮಾಡುವ ಸಂಬಂಧ ಪತ್ರ ಸ್ವೀಕೃತಗೊಂಡಿದ್ದು, ಮಹಾನಗರ ಪಾಲಿಕೆ ಅನುದಾನದಿಂದ ಭರಿಸುವಂತೆ ದಿನಾಂಕ:03-03-2020 ರಂದು ತಿಳಿಸಲಾಗಿರುತ್ತದೆ.<br><br>ಪ್ರಸ್ತುತ, ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರದ ಡಾ: ಬಿ.ಆರ್ ಅಂಬೇಡ್ಕರ್ ಭವನದ ಕಾಮಗಾರಿಯು ಪೂರ್ಣಗೊಂಡಿದ್ದು, ಸದರಿ ಭವನದ ಜಾಗದ ಸಂಬಂಧ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಪಿಟಿಷನ್ ಸಂಖ್ಯೆ: 55098/2017 ದಾಖಲಾಗಿದ್ದು, ವಿಚಾರಣೆ ಹಂತದಲ್ಲಿರುತ್ತದೆ.<br><br>ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಿಂದ ಅಂತಿಮ ಆದೇಶ ಬಂದ ನಂತರ ಸದರಿ ಜಿಲ್ಲಾ ಕೇಂದ್ರದ ಡಾ: ಬಿ.ಆರ್. ಅಂಬೇಡ್ಕರ್ ಭವನವನ್ನು ಇಲಾಖೆಯ ವಶಕ್ಕೆ ಪಡೆದು, ಸಾರ್ವಜನಿಕರ ಉಪಯೋಗಕ್ಕೆ ನೀಡಲು ಕ್ರಮವಹಿಸಲಾಗುವುದು. |
| (ಆ) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಸಮಾಜ ಕಲ್ಯಾಣ ಇಲಾಖೆಯ ಹಾಸ್ಟೆಲ್‌ಗಳಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮವೇನು; (ವಿವರ ನೀಡುವುದು) | ಪ್ರಸ್ತುತ, ಸಮಾಜ ಕಲ್ಯಾಣ ಇಲಾಖೆ ಮತ್ತು ಪರಿಶಿಷ್ಟ ವರ್ಗಗಳ ಇಲಾಖೆಯಲ್ಲಿ ಒಟ್ಟು 353 ವಾರ್ಡನ್ ಹುದ್ದೆಗಳು ಖಾಲಿ ಇದ್ದು, ಖಾಲಿ ಇರುವ ಹುದ್ದೆಗಳನ್ನು ಕರ್ನಾಟಕ ಲೋಕಾಸೇವಾ ಆಯೋಗದ ಮೂಲಕ ಭರ್ತಿ ಮಾಡಲು ಅಗತ್ಯ ಕ್ರಮ ವಹಿಸಲಾಗುವುದು.<br><br>ಖಾಲಿ ಇರುವ ಅಡುಗೆಯವರ ಹುದ್ದೆಗಳನ್ನು ಜಿಲ್ಲಾ ಹಂತದಲ್ಲಿ ಅಡುಗೆ ಸಹಾಯಕರಿಗೆ ಪದೋನ್ನತಿ ನೀಡುವ ಮೂಲಕ ಭರ್ತಿ ಮಾಡಲು ಕ್ರಮ ವಹಿಸಲಾಗುತ್ತಿದೆ. ಉಳಿದಂತೆ ನೇರ ನೇಮಕಾತಿ ಮೂಲಕ ಅಡುಗೆ ಸಹಾಯಕರು ಮತ್ತು ಕಾವಲುಗಾರರ ಹುದ್ದೆಗಳನ್ನು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಿರುವ ಆಯ್ಕೆ ಸಮಿತಿಯ ಮೂಲಕ ಭರ್ತಿ ಮಾಡಲಾಗುತ್ತಿದೆ.<br><br>ನೇಮಕಾತಿ ಆದೇಶ ಹೊರಡಿಸುವ ಸಂದರ್ಭದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಖಾಲಿ ಇರುವ ಹುದ್ದೆಗಳನ್ನು |

| | | |
|---|---|---|
| | | ಅಗತ್ಯತೆಗೆ ಅನುಸಾರ ಭರ್ತಿ ಮಾಡಲು ಕ್ರಮ ವಹಿಸಲಾಗುವುದು. |
| (ಇ) | ರಾಜ್ಯದಲ್ಲಿ ಸಮಾಜ ಕಲ್ಯಾಣ ಇಲಾಖೆಯ ಹಾಸ್ಟಲ್‌ಗಳಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ಇರುವ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಸಮಾಜ ಕಲ್ಯಾಣ ಇಲಾಖೆ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ಎಲ್ಲಾ ವಿದ್ಯಾರ್ಥಿನಿಲಯಗಳಲ್ಲಿನ ನಿಲಯಾರ್ಥಿಗಳಿಗೆ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಅನುದಾನದ ಲಭ್ಯತೆಗನುಗುಣವಾಗಿ ಕಲ್ಪಿಸಲಾಗಿರುತ್ತದೆ.<br><br>ವಿದ್ಯಾರ್ಥಿನಿಲಯಗಳಲ್ಲಿ ನಿಲಯಾರ್ಥಿಗಳಿಗೆ ಅವಶ್ಯಕ ಮೂಲಭೂತ ಸೌಕರ್ಯಗಳಾದ ಹಾಸಿಗೆ ಹೊದಿಕೆ, ಟೂ ಟೈರ್ ಕಾಟ್‌ಗಳು, ಸೋಲಾರ್ ವಾಟರ್ ಹೀಟರ್‌ಗಳು, ಸಿಸಿಟಿವಿಗಳ ಅಳವಡಿಕೆ, ಜಿಂಕ್ ಟ್ರಂಕ್‌ಗಳ ಹಾಗೂ ಇನ್ನಿತರೇ ಅವಶ್ಯಕ ಮೂಲಭೂತ ಸೌಕರ್ಯಗಳನ್ನು ರಾಜ್ಯವಲಯದಿಂದ ಖರೀದಿಸಿ ಒದಗಿಸಲಾಗುತ್ತಿದೆ.<br><br>ನಿಲಯಾರ್ಥಿಗಳ ವಾಸ್ತವ್ಯಕ್ಕೆ ಅನುಕೂಲವಾಗಲು ಬಾಡಿಗೆ ಕಟ್ಟಡಗಳಲ್ಲಿ ನಡೆಯುತ್ತಿರುವ ವಿದ್ಯಾರ್ಥಿನಿಲಯಗಳಿಗೆ ಸ್ವಂತ ಕಟ್ಟಡಗಳ ನಿರ್ಮಾಣ ಮಾಡಿ, ವಾಸದ ಕೊಠಡಿಗಳು, ಸ್ನಾನದ ಕೊಠಡಿಗಳು, ಶೌಚಾಲಯಗಳು ಹಾಗೂ ಇತರೆ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗುತ್ತಿದೆ.<br><br>ಸ್ವಂತ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳಿಗೆ ದುರಸ್ಥಿ/ಉನ್ನತೀಕರಣ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ. |
| (ಈ) | ರಾಜ್ಯದ ಹಾಸ್ಟೆಲ್‌ಗಳ ಬಿಸಿ ನೀರಿನ ವ್ಯವಸ್ಥೆಯನ್ನು ನೀಡದಿರುವ ಬಗ್ಗೆ ಗಮನಕ್ಕೆ ಬಂದಿದೆಯೇ; ಕೈಗೊಂಡಿರುವ ಕ್ರಮವೇನು? (ವಿವರ ನೀಡುವುದು) | ಬಂದಿದೆ.<br><br>ಸಮಾಜ ಕಲ್ಯಾಣ ಇಲಾಖೆ ಹಾಗೂ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಸ್ವಂತ ಕಟ್ಟಡವನ್ನು ಹೊಂದಿರುವ ವಿದ್ಯಾರ್ಥಿನಿಲಯಗಳಲ್ಲಿ ಸೋಲಾರ್ ವಾಟರ್ ಹೀಟರ್‌ಗಳನ್ನು ಅಳವಡಿಸಲಾಗಿರುತ್ತದೆ. ಆದಾಗ್ಯೂ 2019-20ನೇ ಸಾಲಿಗೆ ಸೋಲಾರ್ ವಾಟರ್ ಹೀಟರ್ ವ್ಯವಸ್ಥೆ ಇಲ್ಲದೇ ಇರುವ ವಿದ್ಯಾರ್ಥಿನಿಲಯಗಳಲ್ಲಿ ಸೋಲಾರ್ ವಾಟರ್ ಹೀಟರ್‌ಗಳನ್ನು ಅಳವಡಿಸಲು ಕ್ರಮ ವಹಿಸಲಾಗುವುದು. |

ಸಕಇ 193 ಪಕವಿ 2020

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ
ಮತ್ತು ಸಮಾಜ ಕಲ್ಯಾಣ ಸಚಿವರು.